CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೪, ೨೦೦೩ (ಮಾರ್ಗಶಿರ ೧೩, ಶಕ ವರ್ಷ ೧೯೨೫) | ಸಂಚಿಕೆ ೪೮ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 16 ಎಟಿಎಸ್ 2003, ಬೆಂಗಳೂರು, ದಿನಾಂಕ: 6ನೇ ನವೆಂಬರ್, 2003**

ಅಧಿಸೂಚನೆ ಸಂಖ್ಯೆ: ಕಂಇ 20 ಎಎಸ್‌ಡಿ 2003, ದಿನಾಂಕ:2-9-2003ರಲ್ಲಿ ತಾತ್ಕಾಲಿಕವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ-32ರಡಿಯಲ್ಲಿ ತಹಸೀಲ್ದಾರ್ ಗ್ರೂಪ್-ಬಿ ವೃಂದಕ್ಕೆ ಸ್ವತಂತ್ರ ಪ್ರಭಾರದಲ್ಲಿ ಇಟ್ಟಿರುವ ಈ ಕೆಳಕಂಡ ಅಧಿಕಾರಿಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ಅವರುಗಳ ಹೆಸರಿನ ಮುಂದೆ ಸೂಚಿಸಲಾದ ಸ್ಥಳಗಳಿಗೆ ನೇಮಿಸಿದೆ.

| ಕ್ರ. ಸಂ | ಅಧಿಕಾರಿಯ ಹೆಸರು | ನೇಮಿಸಲಾದ ಸ್ಥಳ |
|---|---|---|
| 1. | ಶ್ರೀ ಗುರುಬಸಪ್ಪ ಮೇತ್ರಿ | ಕಾರ್ಯದರ್ಶಿ, ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರ, ಗುಲ್ಬರ್ಗಾ ಇಲ್ಲಿ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ. |
| 2. | ಶ್ರೀ ದೌಲತ್‌ಗೌಡ ಪಾಟೀಲ್ | ಯೋಜನಾಧಿಕಾರಿ, ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ (ಐಆರ್‌ಇಪಿ) ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಜಿಲ್ಲೆ ಇಲ್ಲಿ ನೇಮಿಸಲು ಇವರ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ವಶಕ್ಕೆ ನೀಡಿದೆ. |
| 3. | ಶ್ರೀ ಕೆ. ಸದಾನಂದಪ್ಪ | ವಿಶೇಷ ತಹಸೀಲ್ದಾರ್, ಬೆಂಗಳೂರು (ದಕ್ಷಿಣ), ಬೆಂಗಳೂರು -ಶ್ರೀ ಶ್ರೀಕಂಠಸ್ವಾಮಿ ಇವರ ವರ್ಗಾವಣೆಯಿಂದ ತೆರವಾದ ಜಾಗದಲ್ಲಿ. |
| 4. | ಶ್ರೀ ಜಿ. ಶಿವರಾಮಪ್ಪ | ವಿಶೇಷ ತಹಸೀಲ್ದಾರ್, ನಿಡಗುಂದಿ, ಬಿಜಾಪುರ ಜಿಲ್ಲೆ, -ಶ್ರೀ ಜಿ. ಶಿವರಾಜ್ ಇವರ ನಿಲಂಬನೆಯಿಂದ ತೆರವಾದ ಜಾಗದಲ್ಲಿ |
| 5. | ಶ್ರೀ ಭಟ್ಟಲ್ ಕೃಷ್ಣಪ್ಪ | ವಿಶೇಷ ತಹಸೀಲ್ದಾರ್, ಭೂಸ್ವಾಧೀನಾಧಿಕಾರಿಗಳ ಕಛೇರಿ ಕೃಷ್ಣಾ ಮೇಲ್ದಂಡೆ ಯೋಜನೆ ಬೀಳಗಿ -ಖಾಲಿ ಹುದ್ದೆ. |
| 6. | ಶ್ರೀ ಎಂ. ನಿಂಗಯ್ಯ | ಚುನಾವಣಾ ತಹಸೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ ಚಿಕ್ಕಮಗಳೂರು ಜಿಲ್ಲೆ ಎಂದು ನೇಮಿಸಲು ಇವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆಗಳು) ಯ ವಶಕ್ಕೆ ನೀಡಲಾಗಿದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1334

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು -3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ 146 ಆಸೇವ 2003, ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003

ದಿನಾಂಕ: 10.11.2003 ರ ಸಮಸಂಖ್ಯೆಯ ಅಧಿಸೂಚನೆಯಲ್ಲಿ ಉಪ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎನ್. ಜಯರಾಂ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರನ್ನು ವರ್ಗಾಯಿಸಿ, ಉಪ ಆಯುಕ್ತರು ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇಲ್ಲಿ ಶ್ರೀ ಕೆ. ಆರ್. ನಿರಂಜನ್, ಇವರ ವರ್ಗಾವಣೆಯಿಂದ ತೆರವಾದ ಹುದ್ದೆಗೆ ವರ್ಗಾಯಿಸಿರುವುದನ್ನು ಭಾಗಶಃ ಮಾರ್ಪಡಿಸಿ ಉಪ ಆಯುಕ್ತರು (ಪೂರ್ವ) ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು - ಖಾಲಿ ಹುದ್ದೆಗೆ ನೇಮಿಸಲು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶದಲ್ಲಿಯೇ ಮುಂದುವರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1335

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಕಂಇ 16 ಎಟಿಎಸ್ 2003, ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003

ಅಧಿಸೂಚನೆ ಸಂಖ್ಯೆ: ಕಂಇ 16 ಎಟಿಎಸ್ 2003, ದಿನಾಂಕ: 7-11-2003ರಲ್ಲಿ ತಾತ್ಕಾಲಿಕವಾಗಿ ತಡೆಹಿಡಿಯಲಾದ ಈ ಕೆಳಕಂಡ ತಹಸೀಲ್ದಾರ್ (ಗುಂಪು-ಬಿ)ರು ಗಳ ವರ್ಗಾವಣೆ ಆದೇಶವನ್ನು ಈ ಕೂಡಲೇ ಜಾರಿಗೆ ಬರುವಂತೆ ತೆರವುಗೊಳಿಸಿದೆ. ಹಾಗೂ ಅಧಿಸೂಚನೆ ಸಂಖ್ಯೆ: ಕಂಇ 16 ಎಟಿಎಸ್ 2003 ದಿನಾಂಕ: 6-11-2003ರ ವರ್ಗಾವಣೆ ಆದೇಶ ಜಾರಿಗೆ ತರಲಾಗಿದೆ.

**ಶ್ರೀಯುತರು:**

1) ಗುರುಬಸಪ್ಪ ಮೇತ್ರಿ
2) ದೌಲತ್‌ಗೌಡ ಪಾಟೀಲ್
3) ಕೆ. ಸದಾನಂದಪ್ಪ
4) ಜಿ. ಶಿವರಾಮಪ್ಪ
5) ಭಟ್ಟಲ್ ಕೃಷ್ಣಪ್ಪ
6) ಎಂ. ನಿಂಗಯ್ಯ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1336

**ಎಂ. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಇಂಧನ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಇಂಇ 169 ಇಇಬಿ 2003, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2003

ಶ್ರೀ ವೀರಕುಮಾರ್ ಅಪ್ಪಾಸೋ ಪಾಟೀಲ್, ಅಧ್ಯಕ್ಷರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರು ತಮ್ಮ ಸ್ಥಾನಕ್ಕೆ ದಿನಾಂಕ: 13-11-2003ರಂದು ರಾಜೀನಾಮೆ ನೀಡಿದ್ದನ್ನು ಸರ್ಕಾರವು ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಅಂಗೀಕರಿಸಿರುತ್ತದೆ.

ಶ್ರೀ ವೀರಕುಮಾರ್ ಅಪ್ಪಾಸೋ ಪಾಟೀಲ್ ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮೆಮೊರಾಂಡಂ ಆಫ್ ಅಸೋಸಿಯೇಷನ್ ನಿಯಮಾವಳಿ ಪ್ರಕಾರ ದಿನಾಂಕ 13-11-2003ರ ಅಪರಾಹ್ನದಿಂದ ಜಾರಿಗೆ ಬರುವಂತೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಅಧ್ಯಕ್ಷರ ಸ್ಥಾನದಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1337

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ನಅಇ 197 ಬೆಂರೂಪ್ರಾ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್, 2003

ದಿನಾಂಕ: 20-1-2003ರ ಅಧಿಸೂಚನೆ ಸಂಖ್ಯೆ ನಅಇ 8 ನಯೋಸೇ 2003ನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡ ನಗರ ಯೋಜನಾ ಉಪ ನಿರ್ದೇಶಕರುಗಳನ್ನು ಅವರ ಹೆಸರಿನ ಮುಂದೆ ತೋರಿಸಿರುವ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಹೆಚ್ಚುವರಿ ಕರ್ತವ್ಯವನ್ನು ನಿರ್ವಹಿಸಲು ಆದೇಶಿಸಿದೆ.

| ಕ್ರ.ಸಂ. | ಹೆಸರು ಮತ್ತು ಪದನಾಮ | ನಗರ ಯೋಜನಾ ಪ್ರಾಧಿಕಾರದ ಹೆಸರು |
|---|---|---|
| 1. | ಶ್ರೀ ಬಿ. ಮಹೇಂದ್ರ,<br>ನಗರ ಯೋಜನಾ ಉಪ ನಿರ್ದೇಶಕರು | ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ ಮತ್ತು ಕನಕಪುರ ಯೋಜನಾ ಪ್ರಾಧಿಕಾರ |
| 2. | ಶ್ರೀ ಕೆ. ಆರ್. ವೀರೇಂದ್ರನಾಥ್<br>ನಗರ ಯೋಜನಾ ಉಪ ನಿರ್ದೇಶಕರು | ಮಾಗಡಿ ಯೋಜನಾ ಪ್ರಾಧಿಕಾರ ಮತ್ತು ನೆಲಮಂಗಲ ಯೋಜನಾ ಪ್ರಾಧಿಕಾರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1338

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ 129 ಆಸೇವ 2003, ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003

ಶ್ರೀ ಡಿ. ಬಿ. ನಾಯಕ್, ಕೆ.ಎ.ಎಸ್. ಹಿರಿಯಶ್ರೇಣಿ ಅಧಿಕಾರಿ, ಹಾಲಿ ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಕೊಪ್ಪಳ, ಇವರ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಹಿಂದಕ್ಕೆ ಪಡೆದು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಆಯುಕ್ತರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾಂ- ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1339

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ ಸಂಖ್ಯೆ: ಸಿಆಸುಇ 60 ಆಸೇವ 2002 (2), ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003

ಶ್ರೀ ಎಸ್. ಎನ್. ಗೌರಿಶಂಕರ್, ಕೆ.ಎ.ಎಸ್. ಹಿರಿಯಶ್ರೇಣಿ ಅಧಿಕಾರಿ, ಹಾಲಿ ಮುಖ್ಯ ಆಡಳಿತಾಧಿಕಾರಿ, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ಜಂಟಿ ಆಯುಕ್ತರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು -ಖಾಲಿ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1340

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ ಸಂಖ್ಯೆ: ಸಿಆಸುಇ 301 ಸಆರ 2003, ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003

ಕರ್ನಾಟಕ ಸರ್ಕಾರ ಸಚಿವಾಲಯದ ಕೆಳಕಂಡ ಅಧೀನ ಕಾರ್ಯದರ್ಶಿಗಳಿಗೆ ಅವರ ಹೆಸರುಗಳ ಮುಂದೆ ಸೂಚಿಸಿರುವಂತೆ ರಜೆಯನ್ನು ಮಂಜೂರು ಮಾಡಲಾಗಿದೆ. ರಜೆಯು ಮುಗಿದ ನಂತರ ಅಧಿಕಾರಿಯವರನ್ನು ಅದೇ ಹುದ್ದೆಯಲ್ಲಿ ಪುನರ್ ನೇಮಕ ಮಾಡಲಾಗಿದೆ.

| ಕ್ರ.ಸಂ | ಅಧಿಕಾರಿಯವರ ಹೆಸರು, ಹುದ್ದೆ ಪದನಾಮ **ಶ್ರೀ: ಶ್ರೀಮತಿ** | ಮಂಜೂರಾಗಿರುವ ರಜೆ | ಖಾತೆಯಲ್ಲಿ ಉಳಿದಿರುವ ರಜೆ |
|---|---|---|---|
| 1 | 2 | 3 | 4 |
| 1. | ಎಸ್. ಆರ್. ಪಾಟೀಲ್ ಅ. ಕಾ. ಲೋ ಮತ್ತು ಜ. ಸಂ. ಇಲಾಖೆ (ಕಾ. ಕೋ) | ದಿ: 23-08-03 ರಿಂದ 27-08-03 ರವರೆಗೆ 50 ದಿನಗಳ ಗಳಿಕೆ ರಜೆ | 235 ದಿನಗಳು |
| 2. | ಡೇನಿಯಲ್ ಬರೆಟ್ಟೋ, ಮುಖ್ಯ ಗ್ರಂಥಾಧಿಕಾರಿ, ಸಚಿವಾಲಯ ಗ್ರಂಥಾಲಯ | ದಿ: 01-09-03 ರಿಂದ 06-09-03 ರವರೆಗೆ 06 ದಿನಗಳ ಗಳಿಕೆ ರಜೆ | 170 ದಿನಗಳು |
| 3. | ಅಹ್ಮದ್ ಎ. ಮುಖ್ತದರ್, ಅ. ಕಾ. ಸಹಕಾರ ಇಲಾಖೆ | ದಿ: 10-09-03ರಿಂದ 12-09-03 ರವರೆಗೆ 03 ದಿನಗಳ ಪರಿವರ್ತಿತ ರಜೆ | 219 ದಿನಗಳು |
| 4. | ಸೈಯದಾ ಅಫಜಲುನೀಸಾ, ಅ. ಕಾ. ಸಿ.ಆ.ಸು.ಇಲಾಖೆ (ಕಾ. ಕೋ) | ದಿ: 11-09-03 ರಿಂದ 20-09-03 ರವರೆಗೆ 10 ದಿನಗಳ ಪರಿವರ್ತಿತ ರಜೆ | 10 ದಿನಗಳು |
| 5. | ಮೊಹಮ್ಮದ್ ಖಲೀಲು ರೆಹಮಾನ್, ಅ. ಕಾ. ಸಿ. ಆ. ಸು. ಇಲಾಖೆ (ಕಾರ್ಯಾಧ್ಯಯನ -1) | ದಿ: 15-09-03 ರಿಂದ 19-09-03 ರವರೆಗೆ 05 ದಿನಗಳ ಪರಿವರ್ತಿತ ರಜೆ | 53 ದಿನಗಳು |
| 6. | ಕಾಶೀನಾಥ್ ಪಟವಾಡಿ, ಅ. ಕಾ. ಆ. ಕು. ಕ. ಇಲಾಖೆ | ದಿ: 15-09-03 ಮತ್ತು 16-09-03 ರವರೆಗೆ 2 ದಿನಗಳ ಪರಿವರ್ತಿತ ರಜೆ ದಿ: 22-09-03ರಿಂದ 24-09-03 ರವರೆಗೆ 03 ದಿನಗಳ ಪರಿವರ್ತಿತ ರಜೆ | 175 ದಿನಗಳು |
| 7. | ಎನ್. ಆರ್. ಜಗನ್ನಾಥ, ಅ. ಕಾ. ಸಿ. ಆ. ಸು. ಇಲಾಖೆ (ಆಡಳಿತ-2) | ದಿ: 17-09-03 ರಿಂದ 24-09-03 ರವರೆಗೆ 08 ದಿನಗಳ ಪರಿವರ್ತಿತ ರಜೆ | 02 ದಿನಗಳು |
| 8. | ಜಿ. ಚೋಮಾನಾಯಕ್, ಅ. ಕಾ. ಆ. ಕು. ಕ. ಇಲಾಖೆ | ದಿ: 29-09-03 ರಿಂದ 03-10-03ರವರೆಗೆ 05 ದಿನಗಳ ಪರಿವರ್ತಿತ ರಜೆ | 38 ದಿನಗಳು |
| 9. | ವಿ. ಕುಮಾರ್ ಅ. ಕಾ. ಕೃಷಿ ಮತ್ತು ತೋಟಗಾರಿಕೆ ಇಲಾಖೆ | ದಿ: 06-10-03ರಿಂದ 15-10-03ರವರೆಗೆ 10 ದಿನಗಳ ಪರಿವರ್ತಿತ ರಜೆ | 30 ದಿನಗಳು |
| 10. | ಕೆ. ಎಸ್. ನವನೀತನ್, ಅ. ಕಾ. ವಾಣಿಜ್ಯ ಮತ್ತು ಕೈಗಾರಿಕೆ (ಕಾ. ಕೋ) | ದಿ: 06-10-03ರಿಂದ 10-10-03ರವರೆಗೆ 05 ದಿನಗಳ ಪರಿವರ್ತಿತ ರಜೆ ದಿ: 22-10-03 ರಂದು 01 ದಿನ ಪರಿವರ್ತಿತ ರಜೆ ದಿ: 01-11-03 ರಂದು 1 ದಿನ ಪರಿವರ್ತಿತ ರಜೆ | 15 ದಿನಗಳು |

| 1 | 2 | 3 | 4 |
|---|---|---|---|
| 11. | ಎನ್. ಮಂಜುಳಗೀತ, ಅ. ಕಾ.<br>ಕೃಷಿ ಮತ್ತು ತೋಟಗಾರಿಕೆ ಇಲಾಖೆ | ದಿ: 06-10-03ರಿಂದ 10-10-03ರವರೆಗೆ 05 ದಿನಗಳ ಪರಿವರ್ತಿತ ರಜೆ | 11 ದಿನಗಳು |
| 12. | ಬಿ. ಎಸ್. ಶ್ರೀನಿವಾಸಮೂರ್ತಿ, ಅ. ಕಾ.<br>ಸಿ. ಆ. ಸು. ಇ. (ಆ. ಸು) | ದಿ: 06-10-03 ರಿಂದ 10-10-03ರವರೆಗೆ 05 ದಿನಗಳ ಗಳಿಕೆ ರಜೆ | 238 ದಿನಗಳು |
| 13. | ಎಸ್. ವಿಶಾಲಾಕ್ಷಮ್ಮ, ಅ. ಕಾ,<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ದಿ: 07-10-03ರಿಂದ 10-10-03ರವರೆಗೆ 04 ದಿನಗಳ ಗಳಿಕೆ ರಜೆ | 240+03 ದಿನಗಳು |
| 14. | ಪದ್ಮಾವತಿ, ಅ. ಕಾ.<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ದಿ: 07-10-03ರಿಂದ 10-10-03 ರವರೆಗೆ 04 ದಿನಗಳ ಪರಿವರ್ತಿತ ರಜೆ | 148 ದಿನಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1341

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 9 ಸೇಅಸೆ 2003, ಬೆಂಗಳೂರು, ದಿನಾಂಕ: 12ನೇ ನವೆಂಬರ್, 2003**

ಇದೇ ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ: 4-9-2003 ರ ಮುಂದುವರಿಕೆಯಲ್ಲಿ ಶ್ರೀಮತಿ ರಶ್ಮಿ ವಿ. ಮಹೇಶ್, ಐ.ಎ.ಎಸ್. ರವರಿಗೆ ದಿನಾಂಕ: 31-8-2003ರಿಂದ 3-9-2003ರವರೆಗೆ ಹಾಗೂ ದಿನಾಂಕ: 9-9-2003ರಿಂದ 31-10-2003ರವರೆಗೆ ಅಸಾಧಾರಣ ರಜೆಯನ್ನು ಮಂಜೂರು ಮಾಡಿದೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 299 ಎಸ್ಎಎಸ್ 2003, ದಿನಾಂಕ: 4-9-2003ರನ್ವಯ ಶ್ರೀಮತಿ ರಶ್ಮಿ ವಿ. ಮಹೇಶ್, ಐ.ಎ.ಎಸ್. ರವರನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು ಈ ಹುದ್ದೆಯಿಂದ ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು, ಈ ಹುದ್ದೆಗೆ ವರ್ಗಾವಣೆ ಮಾಡಲಾಗಿದ್ದು, ಅದರಂತೆ ಅಧಿಕಾರಿಯವರು ದಿನಾಂಕ: 8-9-2003ರ ಪೂರ್ವಾಹ್ನ ಹೊಸ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿರುತ್ತಾರೆ. ಆದುದರಿಂದ, ಶ್ರೀಮತಿ ರಶ್ಮಿ ವಿ. ಮಹೇಶ್, ಐ.ಎ.ಎಸ್. ರವರು ದಿನಾಂಕ: 4-9-2003ರಿಂದ 6-9-2003ರವರೆಗೆ ಕಳೆದ ಅವಧಿಯನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಯ ನಿಯಮ 78ರ ಮೇರೆಗೆ "ಸೇರುವಿಕೆಯ ಕಾಲ" (Joining Time) ಎಂದು ಪರಿಗಣಿಸಿದೆ ಹಾಗೂ ದಿನಾಂಕ: 7-9-2003ರ ಭಾನುವಾರ ಸೇರುವಿಕೆಯ ಕಾಲಕ್ಕೆ ಹೊಂದಾಣಿಕೆ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1342

**ಬಿ. ವಿ. ಕುಮಾರಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)

**ಅಧಿಸೂಚನೆ ಸಂಖ್ಯೆ: ಸಿಆಸುಇ 60 ಆಸೇವ 2002 (1) ಬೆಂಗಳೂರು, ದಿನಾಂಕ: 13ನೇ ನವೆಂಬರ್, 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 2 ಆಸೇಜೆ 94 ದಿನಾಂಕ: 2-7-99 ಹಾಗೂ ಅಧಿಸೂಚನೆ ಸಂಖ್ಯೆ: ಸಿಆಸುಇ 3 ಆಸೇಜೆ 2000 ದಿನಾಂಕ: 4-7-2000ದಲ್ಲಿ ಅನುಕ್ರಮವಾಗಿ ಪ್ರಕಟಿಸಿರುವ ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಹಾಗೂ ಮುಂದುವರೆದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಾರ ಕರ್ನಾಟಕ ಆಡಳಿತ ಸೇವಾ ಸಮೂಹ-ಎ (ಕಿರಿಯ ಶ್ರೇಣಿ) ವೃಂದಕ್ಕೆ ಸೇರಿದ ಈ ಕೆಳಕಂಡ ಅಧಿಕಾರಿಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 10,620- 14,960/- ರ ವೇತನ ಶ್ರೇಣಿಯ ಕರ್ನಾಟಕ ಆಡಳಿತ ಸೇವಾ ಸಮೂಹ-ಎ (ಹಿರಿಯ ಶ್ರೇಣಿ) ವೃಂದಕ್ಕೆ ಸ್ಥಾನಪನ್ನರಾಗಲು ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ನೇಮಿಸಲಾಗಿದೆ.

| ಕ್ರ.ಸಂ | ಅಧಿಕಾರಿಯವರ ಹೆಸರು ಮತ್ತು ಪ್ರಸ್ತುತ ಹುದ್ದೆ | ಬಡ್ತಿ ಮೇಲೆ ನೇಮಿಸಿರುವ ಹುದ್ದೆ |
|---|---|---|
| 1 | 2 | 3 |
| 1. | ಬಿ. ಸುರೇಂದ್ರ ನಾಥ್, ಉಪ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು | ಮುಖ್ಯ ಆಡಳಿತಾಧಿಕಾರಿ, VIMS ಬಳ್ಳಾರಿ -ಖಾಲಿ ಹುದ್ದೆಗೆ |
| 2. | ಶಾಂತಿ ಶಂಕರ್, ಸಹಾಯಕ ಆಯುಕ್ತರು, (ಚುನಾವಣೆಗಳು), ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು. | ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಕೋಲಾರ-ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ. |

| 1 | 2 | 3 |
|---|---|---|
| 3. | ಎಸ್. ಹೆಚ್. ಕುದ್ರಿಮೋತಿ, ಬಂದೀಖಾನೆ, ಗೃಹರಕ್ಷಕ ದಳ, ನಾಗರೀಕ ರಕ್ಷಣೆ ಮತ್ತು ಕಾನೂನು ಮಾಪನ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ | ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆದು ಜೇಷ್ಠತಾ ಕ್ರಮಾಂಕಕ್ಕೆ ಅನುಗುಣವಾಗಿ ಪೂರ್ವಾನ್ವಯ ಬಡ್ತಿ ನೀಡುವುದನ್ನು ಬಾಕಿ ಇಟ್ಟು ಇವರನ್ನು ಬಡ್ತಿ ನಂತರ ಬಂದೀಖಾನೆ, ಗೃಹರಕ್ಷಕ ದಳ, ನಾಗರೀಕ ರಕ್ಷಣೆ ಮತ್ತು ಕಾನೂನು ಮಾಪನ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಮುಂದುವರೆಸಿದೆ. |
| 4. | ಮೊಹಮ್ಮದ್ ಗೌಸ್, ಅಧ್ಯಕ್ಷರು, ಹೆಚ್ಚುವರಿ ಭೂನ್ಯಾಯ ಮಂಡಳಿ, ಪುತ್ತೂರು | ಜಂಟಿ ನಿರ್ದೇಶಕರು/ ಬೋಧಕ ಸದಸ್ಯರು ಆಡಳಿತ ತರಬೇತಿ ಸಂಸ್ಥೆ, ಮೈಸೂರು -ಖಾಲಿ ಹುದ್ದೆಗೆ |
| 5. | ರಾಮಾಂಜನೇಯ, ಉಪಕಾರ್ಯದರ್ಶಿ-1, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಸಹ ನಿರ್ದೇಶಕರು/ ಬೋಧಕ ಸದಸ್ಯರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು -ಖಾಲಿ ಹುದ್ದೆಗೆ |
| 6. | ಆರ್. ಎಸ್. ಯಳಮಲ್ಲೆ, ಪುನರ್ವಸತಿ ಅಧಿಕಾರಿ, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ (ವಿಶೇಷ ಭೂಸ್ವಾಧೀನಾಧಿಕಾರಿ, ರಾಷ್ಟ್ರೀಯ ಹೆದ್ದಾರಿಗಳು, ಧಾರವಾಡ ಹುದ್ದೆಗೆ ವರ್ಗಾವಣೆ ಆದೇಶದಲ್ಲಿರುವವರು) | ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗದಗ್- ಖಾಲಿ ಹುದ್ದೆಗೆ ನೇಮಿಸಲು ಇವರ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಿದೆ. |
| 7. | ಆರ್. ನಾರಾಯಣ, ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು- ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಪ್ರಾಜೆಕ್ಟ್ ಕೆ. ಐ. ಎ. ಡಿ. ಬಿ. ಬೆಂಗಳೂರು | ಕಾರ್ಯದರ್ಶಿ, ಬಾಲಭವನ, ಬೆಂಗಳೂರು- ಹುದ್ದೆಗೆ ಶ್ರೀ ಕೆ.ಎಸ್. ಮಂಜುನಾಥ್ ರವರ ಸ್ಥಾನದಲ್ಲಿ ನೇಮಿಸಲು ಇವರ ಸೇವೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ. |

**ಈ ಬಡ್ತಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ.**

1. ಕೆ.ಎ.ಎಸ್. (ಹಿರಿಯ ಶ್ರೇಣಿ) ವೃಂದದ ಹಾಗೂ ಕೆ. ಎ. ಎಸ್. (ಕಿರಿಯ ಶ್ರೇಣಿ) ವೃಂದದ (ಮುಂದುವರೆದ) ತಾತ್ಕಾಲಿಕ ಜೇಷ್ಠತಾ ಪಟ್ಟಿಗಳನ್ನು ಅಂತಿಮಗೊಳಿಸಿದ ನಂತರ ಪುನರ್ ವಿಮರ್ಶಿಸಲಾಗುವುದು.
2. ಶ್ರೀ ಅಂಟೋನಿ ಮೆಂಡೋಂಕಾ ಹಾಗೂ ಇತರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಹಾಗೂ ಈಗ ಕರ್ನಾಟಕ ಆಡಳಿತ ನ್ಯಾಯಮಂಡಳಿಗೆ ವರ್ಗಾಯಿಸಲಾಗಿರುವ ರಿಟ್ ಅರ್ಜಿ ಸಂಖ್ಯೆ: 19813-19823/ 2000ರ ಪ್ರಕರಣದಲ್ಲಿ ನ್ಯಾಯಮಂಡಳಿಯು ನೀಡಬಹುದಾದ ಅಂತಿಮ ತೀರ್ಪಿನ ನಂತರ ಪುನರ್ ವಿಮರ್ಶಿಸಲಾಗುವುದು.
3. ಶ್ರೀ ಎಸ್. ಎಂ. ಬೇವೂರ್ ಹಾಗೂ ಇತರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ: 1521-1523/ 2000ರಲ್ಲಿ ನ್ಯಾಯ ಮಂಡಳಿಯು ನೀಡಬಹುದಾದ ಅಂತಿಮ ತೀರ್ಪಿನ ನಂತರ ಪುನರ್ ವಿಮರ್ಶಿಸಲಾಗುವುದು.
4. ಶ್ರೀ ಎಸ್. ಟಿ. ಅಂಜನ್ ಕುಮಾರ್ ಹಾಗೂ ಇತರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ: 2887-2889/2001ರಲ್ಲಿ ನ್ಯಾಯ ಮಂಡಳಿಯು ನೀಡಬಹುದಾದ ಅಂತಿಮ ತೀರ್ಪಿನ ನಂತರ ಪುನರ್ ವಿಮರ್ಶಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1343

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಅಧಿಸೂಚನೆ ಸಂಖ್ಯೆ: ಸಿಆಸುಇ 20 ಅಸೇನಿ 2003 ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್, 2003

ಈ ಕೆಳಗೆ ನಮೂದಿಸಿರುವ ಕೆ. ಎ. ಎಸ್. ಸಮೂಹ ಎ (ಹಿರಿಯ ಶ್ರೇಣಿ) ಮತ್ತು (ಕಿರಿಯ ಶ್ರೇಣಿ) ಅಧಿಕಾರಿಗಳು 58 ವರ್ಷಗಳ ವಯೋಮಿತಿ ತಲುಪಿ 2004ನೇ ವರ್ಷದಲ್ಲಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕಗಳಂದು ಅಪರಾಹ್ನ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

| ಕ್ರ.ಸಂ | ಅಧಿಕಾರಿಯವರ ಹೆಸರು ಮತ್ತು ಪ್ರಸ್ತುತ ಹುದ್ದೆ | ಜನ್ಮ ದಿನಾಂಕ | 58 ವರ್ಷ ವಯೋಮಿತಿ ತಲುಪಿ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದುವ ದಿನಾಂಕ |
|---|---|---|---|
| 1 | 2 | 3 | 4 |
| | **ಕೆ. ಎ. ಎಸ್. (ಹಿರಿಯ ಶ್ರೇಣಿ)** | | |
| 1. | ಶ್ರೀ ಕೆ. ತಮ್ಮಯ್ಯ, ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಮೈಸೂರು | 14-04-1946 | 30-04-2004 |
| 2. | ಶ್ರೀ ಶಿವಾನಂದ ಶರ್ಮಾ, ಎಸ್. ಗ್ರೂಪ್ ಮ್ಯಾನೇಜರ್, ಕೃಷ್ಣ ಮೇಲ್ದಂಡೆ ಯೋಜನೆ, ಭೀಮರಾಯನ ಗುಡಿ, ಗುಲ್ಬರ್ಗಾ ಜಿಲ್ಲೆ | 15-04-1946 | 30-04-2004 |

| 1 | 2 | 3 | 4 |
|---|---|---|---|
| 3. | ಶ್ರೀ ಮೂರ್ತಿ ಎಸ್. ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಮಂಡ್ಯ | 12-06-1946 | 30-06-2004 |
| 4. | ಶ್ರೀ ಸಜ್ಜನ್ ವಿ. ವಿ. ವಿಶೇಷ ಜಿಲ್ಲಾಧಿಕಾರಿಗಳು ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ | 08-10-1946 | 31-10-2004 |
| 5. | ಶ್ರೀ ಅಭಯ್ ಕುಮಾರ್ ಟಿ. ಡಿ. ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು | 17-10-1946 | 31-10-2004 |
| 6. | ಶ್ರೀ ಸೋಮಣ್ಣಾನವರ್ ಎಸ್. ವಿ. ಜಿಲ್ಲಾ ಯೋಜನಾ ಸಮನ್ವಯಾಧಿಕಾರಿ, ವಿಶ್ವ ಬ್ಯಾಂಕ್ ನೆರವಿನ ಕೆರೆ ಅಭಿವೃದ್ಧಿ ಯೋಜನೆ ಕೊಪ್ಪಳ | 01-01-1947 | 31-12-2004 |
| | **ಕೆ. ಎ. ಎಸ್. (ಕಿರಿಯ ಶ್ರೇಣಿ)** | | |
| 1. | ಶ್ರೀ ಅಚ್ಚಣ್ಣ ಪಿ. ಜಿಲ್ಲಾಧಿಕಾರಿಗಳು, ಕೇಂದ್ರ ಸ್ಥಾನಿಕ ಸಹಾಯಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ | 03-02-1946 | 29-02-2004 |
| 2. | ಶ್ರೀ ಮೀರಜ್‌ಕರ್ ಸಿ. ಎಸ್. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಹುಬ್ಬಳ್ಳಿ | 01-03-1946 | 29-02-2004 |
| 3. | ಶ್ರೀ ಜಾಲಿಹಾಳ್ ಎಫ್. ವೈ. ಉಪ ವಿಭಾಗಾಧಿಕಾರಿ, ಗದಗ್ ಉಪ ವಿಭಾಗ, ಗದಗ | 01-03-1946 | 29-02-2004 |
| 4. | ಶ್ರೀ ಮೊಹಮ್ಮದ್ ಗೌಸ್, ಅಧ್ಯಕ್ಷರು, ಹೆಚ್ಚುವರಿ ಭೂಸ್ವಾಧೀನಾಧಿಕಾರಿ, ಪುತ್ತೂರು | 15-04-1946 | 30-04-2004 |
| 5. | ಶ್ರೀ ಹನುಮಂತಯ್ಯ ಹೆಚ್. ಎನ್. ಉಪ ವಿಭಾಗಾಧಿಕಾರಿ, ಬಾಗಲಕೋಟೆ ಉಪ ವಿಭಾಗ, ಬಾಗಲಕೋಟೆ | 01-09-1946 | 31-08-2004 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1344

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**HIGH COURT OF KARNATAKA, BANGALORE**

**NOTIFICATION No. GOB (I) 3/ 2003, DATED: 30th OCTOBER 2003**

Sri Sabappa appointed as Civil Judge (Junior Division) in the Karnataka Judicial Service under Government Notification No. LAW 141 LAC 2003 dated: 22-10-2003 is posted to work as JMFC IV Court, Mangalore (Vacant Post), to take effect from the forenoon of 06-11-2003 and until further orders.

By Order of the High Court,

P. R. 1345

**N. ANANDA**

Registrar General

**DEPARTMENT OF PERSONNEL AND ADMINISTRATIVE REFORMS SECRETARIAT**

**NOTIFICATION No. DPAR 297 SGO 2002 BANGALORE, DATED: 12th NOVEMBER 2003**

Smt. Kavitha Kestur, IA & AS (Senior Administrative Grade), is continued on deputation for a further period from 05-11-2003 to 4-11-2004 in the post of Controller and Ex-Officio Secretary to Government (Accounts Management), Finance Department, Karnataka Government Secretariat, Bangalore.

The terms and conditions of deputation issued in Government Order No. DPAR 45 SEM 2000 dated: 03-03-2002 shall continue to hold good for the above period.

By Order and in the name of the Governor of Karnataka,

P. R. 1346

**U. P. PRABHU**

Under Secretary to Government, DPAR (Services-2).

**NOTIFICATION No. DPAR 94 SHC 2003 BANGALORE, DATED: 15th NOVEMBER 2003**

The following Thirty One Civil Judges (Senior Division) are promoted on adhoc basis to officiate as District Judges with immediate effect.

**Sri/ Smt.**

| | | | |
|---|---|---|---|
| 1. | Shankar N. Naik | 2. | Subhash T. Gogi |
| 3. | A. B. Wadeyar | 4. | Ravindra M. Vaidya |
| 5. | V. H. Kulkarni | 6. | C. N. Shivapuji |

| | | | |
|---|---|---|---|
| 7. | M. K. Prahlad | 8. | V. G. Savadkar |
| 9. | S. Renuka Prasad | 10. | J. S. Somashekhara |
| 11. | A. Manjunathappa @ A. Manjunatha | 12. | G. K. Somanath |
| 13. | S. C. Ingalagi | 14. | Madappa S. Kanti |
| 15. | S. Y. Kumbar | 16. | Vidyavathi S. Akki |
| 17. | M. A. Lohar | 18. | V. N. Ravindra |
| 19. | D. R. Venkatasudarshan | 20. | B. Balakrishna |
| 21. | T. Nagappa | 22. | K. Manamohana |
| 23. | H. S. Kamala | 24. | P. G. M. Patil |
| 25. | A. N. Hakeem | 26. | Savithri S. Vinayaka |
| 27. | K. A. Lalitha | 28. | P. A. Shivaprasad Naik |
| 29. | M. Ramesh Rao | 30. | N. S. Neginal |
| 31. | A. S. Bellunke | | |

Posting orders will be issued separately by the High Court of Karnataka.

By Order and in the name of the Governor of Karnataka,

P. R. 1347

**K. RAGHURAM BHANDARY**

Under Secretary to Government, DPAR (Services-3).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಆನಾಸ 116 ಆಇಸೇ 2003 (ಭಾಗ) ಬೆಂಗಳೂರು, ದಿನಾಂಕ: 14ನೇ ನವೆಂಬರ್, 2003**

ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರುಗಳ ಹುದ್ದೆಗೆ ಪ್ರತಿನಿಯೋಜನೆ ಮೇಲೆ ಭರ್ತಿ ಮಾಡಲು ಈ ಮುಂದೆ ಕಾಣಿಸಿದ ಗ್ರೇಡ್-1 ತಹಸೀಲ್ದಾರರುಗಳು ಸೇವೆಯನ್ನು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ವಶಕ್ಕೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 234 ಎಎಸ್‌ಡಿ 2003, ದಿನಾಂಕ: 20-9-2003ರಲ್ಲಿ ನೀಡಿರುವ ಮೇರೆಗೆ ಅವರಿಗೆ ಮುಂದೆ ಕಾಣಿಸಿದ ಸ್ಥಳದಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ (ಶ್ರೀ : ಶ್ರೀಮತಿ) | ನೇಮಕ ಮಾಡಿದ ಸ್ಥಳ |
|---|---|---|
| 1. | ಬಿ. ಕೆ. ಸೀತಾರಾಮ ಶಾಸ್ತ್ರಿ ತಹಸೀಲ್ದಾರ್ ಗ್ರೇಡ್-1, ನೇಮಕಾತಿ ನಿರೀಕ್ಷಣೆಯಲ್ಲಿ | ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ. ಜಿ. ಎಫ್. ಕೋಲಾರ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1348

**ಜೆ. ಶ್ರೀನಿವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಆಸುಇ 343 ಸಅಸೇ 2003 ಬೆಂಗಳೂರು, ದಿನಾಂಕ: 17ನೇ ನವೆಂಬರ್, 2003**

ಅಧಿಸೂಚನೆ ಸಂಖ್ಯೆ: ಲೋಇ 306 ಸೇಸಎ 2003 (ಭಾಗ-ಪಿ), ದಿನಾಂಕ: 31-5-2003 ಹಾಗೂ ಸಕಇ 109 ಎಸ್‌ಡಿಸಿ 2003, ದಿನಾಂಕ: 31-7-2003ರಲ್ಲಿ ಶ್ರೀ ಜಿ. ರಮೇಶ್, ಸಹಾಯಕ ಕಾರ್ಯಪಾಲಕ ಅಭಿಯಂತರರು, ನಿಯೋಜನೆ ಮೇಲೆ ಸರ್ಕಾರದ ಅಧೀನ ಕಾರ್ಯದರ್ಶಿ (ಇ.ಎ.ಪಿ) ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಇವರನ್ನು ಹಿಂದುಳಿದ ವರ್ಗಗಳ ನಿರ್ದೇಶನಾಲಯ ಇಲ್ಲಿಗೆ ವರ್ಗಾವಣೆ ಮೇಲೆ ನೇಮಿಸಿರುವುದರಿಂದ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಅಧೀನ ಕಾರ್ಯದರ್ಶಿ (ಇ.ಎ.ಪಿ) ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಹುದ್ದೆಯಿಂದ ಬಿಡುಗಡೆ ಮಾಡಲಾಗಿದೆ.

**ಭಾಗ-2**

ಅಧಿಸೂಚನೆ ಸಂಖ್ಯೆ: ಲೋಇ 496 ಸೇಸಎ 2003, ದಿನಾಂಕ: 29-10-2003 ರಲ್ಲಿ ಶ್ರೀ ಜಿ. ಎಸ್. ನರಸಿಂಹಮೂರ್ತಿ, ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರನ್ನು ಸರ್ಕಾರದ ಅಧೀನ ಕಾರ್ಯದರ್ಶಿ, (ಇ. ಎ. ಪಿ) ಜಲಸಂಪನ್ಮೂಲ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಹುದ್ದೆಗೆ ನೇಮಿಸಲು ಪ್ರಸ್ತಾಪಿಸಿ ಅವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಿರುವುದರಿಂದ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಅಧೀನ ಕಾರ್ಯದರ್ಶಿ (ಇ. ಎ. ಪಿ.) ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1349

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 381 ಸೆಆಸೆ 2003 ಬೆಂಗಳೂರು, ದಿನಾಂಕ: 17ನೇ ನವೆಂಬರ್, 2003**

ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಬೆಂಗಳೂರು, ಇವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಬಂಡವಾಳ ಹಿಂತೆಗೆತ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಇಲಾಖೆ, ಬೆಂಗಳೂರು, ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1350

**ಬಿ. ವಿ. ಕುಮಾರಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-1).

## ಕಂದಾಯ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಕಂಇ 287 ಎಎಸ್‌ಡಿ 2003 ಬೆಂಗಳೂರು, ದಿನಾಂಕ: 14ನೇ ನವೆಂಬರ್, 2003**

ಕಂದಾಯ ಇಲಾಖೆಯ ತಹಸೀಲ್ದಾರ್ ಗ್ರೇಡ್-1 ಹಾಗೂ ತಹಸೀಲ್ದಾರ್ ಗುಂಪು -ಬಿ ವೃಂದದ ಈ ಕೆಳಕಂಡ ಅಧಿಕಾರಿಗಳಿಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

| ಕ್ರ. ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ | ವರ್ಗಾವಣೆಗೊಂಡ ಸ್ಥಳ |
|---|---|---|
| 1. | ಶ್ರೀ ಬಿ. ಎ. ಗೌರಾಜ್, ತಹಸೀಲ್ದಾರ್, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ | ತಹಸೀಲ್ದಾರ್, ರಾಯಬಾಗ್ ತಾಲ್ಲೂಕು (ಶ್ರೀ ಆರ್. ಎ. ಪಾಟೀಲ್ ಇವರ ವರ್ಗಾವಣೆಯಿಂದ ತೆರವಾದ ಜಾಗದಲ್ಲಿ) |
| 2. | ಶ್ರೀ ಆರ್. ಎ. ಪಾಟೀಲ್, ತಹಸೀಲ್ದಾರ್ ರಾಯಬಾಗ್ ತಾಲ್ಲೂಕು | ಮುನ್ಸಿಪಲ್ ತಹಸೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ ಬೆಳಗಾವಿ (ಖಾಲಿ ಹುದ್ದೆಯಲ್ಲಿ) |
| 3. | ಶ್ರೀ ವಿ. ಬೈರಾರೆಡ್ಡಿ, ಚುನಾವಣಾ ತಹಸೀಲ್ದಾರ್ ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು. | ಉಪ ಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಬೆಂಗಳೂರು (ಶ್ರೀ ಶ್ರೀನಿವಾಸಯ್ಯ ಇವರ ವರ್ಗಾವಣೆಯಿಂದ ತೆರವಾದ ಜಾಗದಲ್ಲಿ) ಎಂದು ನೇಮಿಸಲು ಇವರ ಸೇವೆಯನ್ನು ಸಿಆಸುಇ (ತರಬೇತಿ) ವಶಕ್ಕೆ ನೀಡಲಾಗಿದೆ. |
| 4. | ಶ್ರೀ ಶ್ರೀನಿವಾಸಯ್ಯ , ಉಪಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಬೆಂಗಳೂರು | ಚುನಾವಣಾ ತಹಸೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ತುಮಕೂರು (ಶ್ರೀ ಬೈರಾರೆಡ್ಡಿ ಇವರ ವರ್ಗಾವಣೆಯಿಂದ ತೆರವಾದ ಜಾಗದಲ್ಲಿ) ಎಂದು ನೇಮಿಸಲು ಇವರ ಸೇವೆಯನ್ನು ಸಿಆಸುಇ (ಚುನಾವಣೆ) ವಶಕ್ಕೆ ನೀಡಲಾಗಿದೆ. |
| 5. | ಸೈಯದ್ ಗೌಸ್ ಮೊಹಿದ್ದೀನ್, ಸಹಾಯಕ ಕಾರ್ಯದರ್ಶಿ, ಕರ್ನಾಟಕ ವಕ್ಫ್ ಮಂಡಳಿ, ಬೆಂಗಳೂರು. | ಜಲಾನಯನ ಅಭಿವೃದ್ಧಿ ಇಲಾಖೆಯ ಆಯುಕ್ತರ ಕಛೇರಿಯಲ್ಲಿನ ಆಡಳಿತಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ. |

ಕ್ರಮ ಸಂಖ್ಯೆ 1, 3 ಮತ್ತು 5 ರಲ್ಲಿನ ತಹಶೀಲ್ದಾರ್‌ರುಗಳು ಯಾವುದೇ ವರ್ಗಾವಣೆ ಭತ್ಯೆ ಮತ್ತು ಸೇರುವ ಕಾಲದ ಅವಧಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1351

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 227 ಬೆಂರೂಪ್ರಾ 2003 ಬೆಂಗಳೂರು, ದಿನಾಂಕ: 22ನೇ ನವೆಂಬರ್, 2003**

ಅಧಿಸೂಚನೆ ಸಂಖ್ಯೆ: ನಅಇ 109 ಬೆಂರೂಪ್ರಾ 2000, ದಿ: 23-11-2000ರಲ್ಲಿ ಚಿಂತಾಮಣಿ ನಗರ ಯೋಜನಾ ಪ್ರಾಧಿಕಾರಕ್ಕೆ ಶ್ರೀ ಸೈಯದ್ ಅಫ್ರೋಸ್ ಇವರನ್ನು ಅಧ್ಯಕ್ಷರು ಹಾಗೂ ಇತರೆ ಸದಸ್ಯರುಗಳನ್ನು ನೇಮಕ ಮಾಡಲಾಗಿತ್ತು. ಸದರಿಯವರ ಅವಧಿ ದಿನಾಂಕ: 22-11-2003ಕ್ಕೆ ಮುಕ್ತಾಯಗೊಂಡಿರುವುದರಿಂದ, ತಹಸೀಲ್ದಾರ್, ಚಿಂತಾಮಣಿ ಇವರನ್ನು ಚಿಂತಾಮಣಿ ನಗರ ಯೋಜನಾ ಪ್ರಾಧಿಕಾರಕ್ಕೆ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1352

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.